# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 245(374) (ವರ್ಗಾವಣೆಗೊಂಡ ಪ್ರಶ್ನೆ)
ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀಎನ್. ಅಪ್ಪಾಜಿ ಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 12.12.2018
ಉತ್ತರಿಸಬೇಕಾದ ಸಚಿವರು : ಮಾನ್ಯ ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು.

| ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ದಿನಾಂಕ: 21.11.2018ರಂದು ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕು ಕೊಪ್ಪ ಸಮೀಪದ ಎನ್.ಎಸ್.ಎಲ್.ಸಕ್ಕರೆ ಕಾರ್ಖಾನೆಯ ನಿರುಪಯುಕ್ತ ಸ್ಪೆಂಟ್ ವಾಷ್ ಮೆಜರ್ ಬಾಯ್ಲರ್ ಸ್ಫೋಟಗೊಂಡಿರುವುದು ಸರ್ಕಾರ ಗಮನಕ್ಕೆ ಬಂದಿದೆಯೇ; ಈ ಸ್ಫೋಟದಿಂದ ಜನ-ಜಾನುವಾರುಗಳಿಗೆ ಹಾಗೂ ಕೃಷಿ ಭೂಮಿಗೆ, ನದಿ ನೀರಿಗೆ ಆಗಿರುವ ದುಷ್ಪರಿಣಾಮದ ವಿವರ ನೀಡುವುದು; | ದಿನಾಂಕ: 21.11.2018 ರಂದು ಬೆಳಗ್ಗೆ ಮೆ: ಎನ್.ಎಸ್.ಎಲ್ ಶುಗರ್ಸ್ ಲಿಮಿಟೆಡ್ ಕೈಗಾರಿಕೆಯಲ್ಲಿ ಸಂಸ್ಕರಣೆ ಎಂದು ಶೇಖರಿಸಲಾದ 8000 ಕಿಲೋ ಲೀಟರ್ ಸ್ಪೆಂಟ್‌ವಾಷ್ ಸಂಗ್ರಹಣೆ ಟ್ಯಾಂಕ್ ಕುಸಿದು, ಅದರಲ್ಲಿದ 8000 ಕಿಲೋ ಲೀಟರ್ ಸ್ಪೆಂಟ್‌ವಾಷ್ ಹೊರಗೆ ಹರಿದು ಸಂಗ್ರಹಣಾ ಟ್ಯಾಂಕ್ ಹಿಂಭಾಗದ ಕೃಷಿ ಭೂಮಿಗೆ ಸೇರಿರುತ್ತದೆ. ಸುಮಾರು 80 ಹೆಕ್ಟೇರ್ ಕೃಷಿಭೂಮಿಯಲ್ಲಿ ಬೆಳದ ಭತ್ತ ಹಾಗೂ ರಾಗಿ ಬೆಳೆಗೆ ಹಾನಿಯಾಗಿರುವುದು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಅಧಿಕಾರಿಗಳ ಪರಿವೀಕ್ಷಣೆಯ ಸಮಯದಲ್ಲಿ ಕಂಡುಬಂದಿರುತ್ತದೆ. ಸ್ಪೆಂಟ್‌ವಾಶ್‌ನ ಪ್ರಮಾಣ ಹೆಚ್ಚಾಗಿದ್ದರಿಂದ ಕೈಗಾರಿಕೆಯ ಹಿಂಭಾಗದಲ್ಲಿರುವ ಕೋಡಿಹಳ್ಳ(ನಾಲ)ಗೆ ಸೇರಿ ಹರಿದು ಶಿಂಷಾನದಿಗೆ ಸೇರಿರುತ್ತದೆ. ಈ ಘಟನೆಯಲ್ಲಿ ಬಾಯ್ಲರ್ ಸ್ಫೋಟವಾಗಿರುವುದು ಮಂಡಳಿಯ ಪರಿವೀಕ್ಷಣಾ ಸಮಯದಲ್ಲಿ ಕಂಡು ಬಂದಿರುವುದಿಲ್ಲ.<br><br>ಸದರಿ ಘಟನೆಯಲ್ಲಿ ಶ್ರೀ ಎಂ. ಆನಂದ್ ಎಂಬ ಒಬ್ಬ ಕಾರ್ಮಿಕನ ದೇಹಕ್ಕೆ ಮಾತ್ರ ಸ್ಪೆಂಟ್ ವಾಷ್ ಸೇರಿದ್ದು, ಅವರನ್ನು ಕಾರ್ಖಾನೆಯ ಆಡಳಿತವರ್ಗದವರು ಅಂದೇ ಅಂದರೆ ದಿನಾಂಕ: 21.11.2018 ರಂದು ಮೈಸೂರಿನ ಮೆ: ಕೊಲಂಬಿಯಾ ಏಷಿಯಾ ಆಸ್ಪತ್ರೆಗೆ ದಾಖಲು ಮಾಡಿ ಚಿಕಿತ್ಸೆ ಕೊಡಿಸಲಾಗಿದೆ. ಸದರಿ ಕಾರ್ಮಿಕ ಯಾವುದೇ ಪ್ರಾಣಾಪಾಯವಿಲ್ಲದೆ ಆಸ್ಪತ್ರೆಯಿಂದ ಬಿಡುಗಡೆ ಹೊಂದಿದ್ದಾರೆ. |
| ಆ) | ಈ ವಿಷಾನಿಲ ಕಾರ್ಖಾನೆ ಸುತ್ತಮುತ್ತ ಇರುವ ಕೃಷಿಭೂಮಿ ಸೇರ್ಪಡೆಯಾಗಿರುವುದರ ಜೊತೆಗೆ ಶಿಂಷಾನದಿಗೆ ಸೇರ್ಪಡೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಸಂಬಂಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಸ್ಪೆಂಟ್‌ವಾಷ್ ಸಂಗ್ರಹಣೆಯ ಟ್ಯಾಂಕ್ ಕುಸಿದ ಕಾರಣದಿಂದ ಸೋರಿಕೆಯಾಗಿ ಸುತ್ತಮುತ್ತಲಿನ ಕೃಷಿ ಭೂಮಿಗೆ ತ್ಯಾಜ್ಯ ನೀರು ಸೇರಿ ಬೆಳೆ ನಾಶವಾಗಿರುತ್ತದೆ ಹಾಗೂ ಶಿಂಷಾ ನದಿಗೆ ಸೇರಿರುವುದು ಕಂಡುಬಂದಿರುತ್ತದೆ.<br>• ದಿನಾಂಕ 24-11-2018 ರಂದು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಮೈಸೂರು ವಲಯ ಕಚೇರಿಯಿಂದ ಈ ಕಾರ್ಖಾನೆಗೆ ಜಲ (ಮಾಲಿನ್ಯ ತಡೆಗಟ್ಟುವಿಕೆ ಮತ್ತು ನಿಯಂತ್ರಣ) ಕಾಯ್ದೆ, 1974ರ ಸೆಕ್ಷನ್ 32(1)(ಸಿ) ರನ್ವಯ Prohibitory Order ನ್ನು ನೀಡಲಾಗಿದೆ.<br>• ದಿನಾಂಕ 04-12-2018 ರಂದು ಜಲ(ಮಾಲಿನ್ಯ ತಡೆಗಟ್ಟುವಿಕೆ ಮತ್ತು ನಿಯಂತ್ರಣ) ಕಾಯ್ದೆ, 1974ರ ಸೆಕ್ಷನ್ 33(ಎ) ರನ್ವಯ ಮದ್ಯಸಾರ ಘಟಕಕ್ಕೆ ಮುಚ್ಚುವ |

| | | |
|---|---|---|
| | | ಆದೇಶವನ್ನು ನೀಡಲಾಗಿದೆ.<br>• ಕಾರ್ಖಾನೆಯ ವಿರುದ್ಧ ಮಂಡಳಿಯು ಕ್ರಿಮಿನಲ್ ಮೊಕದ್ದಮೆ ಸಂಖ್ಯೆ. ಎಫ್.ಆರ್. 778/2018 ಅನ್ನು ಮೊದಲ ಹೆಚ್ಚುವರಿ ಸಿವಿಲ್ ನ್ಯಾಯಾಲಯ ಮತ್ತು ಜೆ.ಎಂ.ಎಫ್.ಸಿ ಮದ್ದೂರು ಇಲ್ಲಿ ದಾಖಲಿಸಲಾಗಿದೆ.<br>• ಘಟನೆಯ (ದಿನಾಂಕ 21-11-2018) ನಂತರ ಮದ್ಯಸಾರ ಘಟಕ ಕಾರ್ಯಾಚರಣೆಯಲ್ಲಿ ಇರುವುದಿಲ್ಲವೆಂದು ಮಂಡಳಿಯ ವರದಿಸಿರುತ್ತದೆ..<br>• ಮದ್ಯಸಾರ ಸ್ಥಗಿತಗೊಂಡ ಹಿನ್ನಲೆಯಲ್ಲಿ ಉತ್ಪಾದನಾ ಹಂತದಲ್ಲಿ ಉಳಿದಿರುವ ಸ್ಪೆಂಟ್‌ವಾಷ್ ಮೊಲಾಸಿಸ್ ಇತ್ಯಾದಿಗಳನ್ನು ಸುರಕ್ಷಿತವಾಗಿ ವಿಲೇವಾರಿ ಮಾಡಲು ಸೂಕ್ತ ಕ್ರಮ ಕೈಗೊಂಡು ವರದಿ ನೀಡುವಂತೆ ಉದ್ದಿಮೆದಾರರಿಗೆ ದಿನಾಂಕ 23-11-2018 ರಂದು ಮಂಡಳಿವತಿಯಿಂದ ಪತ್ರ ಬರೆಯಲಾಗಿದೆ.<br>• ಉದ್ದಿಮೆದಾರರಿಂದ ಕೋಡಿಹಳ್ಳಕ್ಕೆ ತಡೆಗೋಡೆಗಳನ್ನು ನಿರ್ಮಿಸಿ ನೀರು ಮುಂದೆ ಹರಿಯದಂತೆ ತಡೆಗಟ್ಟಲಾಗಿದೆ ಹಾಗೂ ಹಳ್ಳದಿಂದ ಕಲುಷಿತ ನೀರನ್ನು ಪಂಪ್ ಮಾಡಿ ಹೊರತೆಗೆಯಲಾಗುತ್ತಿದೆ.<br>• ಉದ್ದಿಮೆದಾರರಿಂದ ಕೋಡಿಹಳ್ಳದ ನೀರಿಗೆ ಸುಣ್ಣವನ್ನು ಮಿಶ್ರಣ ಮಾಡಿ ನೀರಿನ pH ನ್ನು ನಿಯಂತ್ರಿಸಲಾಗುತ್ತಿದೆ.<br>• ಕಾರ್ಖಾನೆಯ ಆವರಣದಿಂದ ಯಾವುದೇ ಕಲ್ಮಷ ತ್ಯಾಜ್ಯ ನೀರು ಹೊರಹೋಗದಂತೆ ತಡೆಗೋಡೆಯನ್ನು ನಿರ್ಮಿಸಲಾಗಿದೆ ಹಾಗೂ ಘಟನೆಯ ಸ್ಥಳದ ಸುತ್ತಮುತ್ತಲಿನ ಕಲುಷಿತ ಮಣ್ಣನ್ನು ಹೊರ ತೆಗೆದು ಕಾಂಪೋಸ್ಟ್ ಘಟಕಕ್ಕೆ ಉದ್ದಿಮೆದಾರರಿಂದ ನೀಡಲಾಗುತ್ತಿದೆ.<br>• ನಾಲಾ ನೀರನ್ನು ಕುಡಿಯಲು ಉಪಯೋಗಿಸದಂತೆ ಮಂಡಳಿ ಹಾಗೂ ಉದ್ದಿಮೆಯ ವತಿಯಿಂದ ಪ್ರಚಾರ ನೀಡಲಾಗುತ್ತಿದೆ.<br>• ಕುಡಿಯುವ ನೀರನ್ನು ಟ್ಯಾಂಕರ್‌ಗಳ ಮೂಲಕ ಚಿಕ್ಕೋನಹಳ್ಳಿ ಮತ್ತು ಆನೆದೊಡ್ಡಿ ಗ್ರಾಮಗಳಿಗೆ ನೀಡಲಾಗುತ್ತಿದೆ.<br>• ಆರೋಗ್ಯ ಇಲಾಖೆಯಿಂದ ಆರೋಗ್ಯ ಶಿಬಿರವನ್ನು ತೆರೆಯಲಾಗಿದೆ.<br>• ದಿನಾಂಕ 24-11-2018 ರ ವಿಶ್ಲೇಷಣಾ ವರದಿಯನ್ವಯ ನದಿ ನೀರಿನ ಗುಣಮಟ್ಟವು ತಗ್ಗಹಳ್ಳಿ ಬ್ಯಾರೇಜ್ ಮತ್ತು ಕೋಡಿಹಳ್ಳ confluence ಗಳಲ್ಲಿ 'D' ವರ್ಗದಲ್ಲಿದ್ದು ಇನ್ನುಳಿದ ಜಾಗಗಳಲ್ಲಿ 'C' ವರ್ಗದಲ್ಲಿರುತ್ತದೆ. ಸದರಿ ವರದಿಯನ್ವಯ ಮದ್ದೂರು ರೋಡ್ ಬ್ರಿಡ್ಜ್‌ನಿಂದ ಮುಂದೆ ಶಿಂಷಾ ನದಿಯ ನೀರನ್ನು Conventional treatment ಮಾಡಿ ಕುಡಿಯಲು ಉಪಯೋಗಿಸಬಹುದಾಗಿರುತ್ತದೆ. |

<table>
<tr>
<td>ಇ)</td>
<td>ಈ ಸ್ಫೋಟದಿಂದ ಆದ ಸಾವು-ನೋವು ಗಾಯಗೊಂಡವರ ಸಂಖ್ಯೆ ಹಾಗೂ ಇವರ ಚಿಕಿತ್ಸೆಗೆ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು) (ವಿವರ ನೀಡಿವುದು)</td>
<td>ಸ್ಫೋಟದಿಂದ ಒಬ್ಬ ಕಾರ್ಮಿಕನು ಗಾಯಾಳುವಾಗಿದ್ದು, ಆಸ್ಪತ್ರೆಯಲ್ಲಿ ಚಿಕಿತ್ಸೆ ನೀಡಿ ಬಿಡುಗಡೆ ಹೊಂದಿರುತ್ತಾರೆ.<br><br>ಕಾರ್ಖಾನೆಯ ಅನುಭವದಾರರು & ವ್ಯವಸ್ಥಾಪಕರ ವಿರುದ್ಧ ಕಾರ್ಖಾನೆಗಳ ಕಾಯ್ದೆ, 1948 ರ ಕಲಂ 7A(2)(a), 7A(2)(b) & ಕರ್ನಾಟಕ ಕಾರ್ಖಾನೆಗಳ ನಿಯಮಗಳು, 1969ರ ನಿಯಮ 83 ಗಳ ಉಲ್ಲಂಘನೆಗಳಿಗೆ ಮಾನ್ಯ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಲಾಗಿದೆ.</td>
</tr>
<tr>
<td>ಈ)</td>
<td>ಎಷ್ಟು ಹೆಕ್ಟೇರ್ ಕೃಷಿ ಭೂಮಿಗೆ ಈ ವಿಷಾನಿಲ ಸೇರ್ಪಡೆಯಾಗಿರುತ್ತದೆ; ಆಗಿರುವ ಬೆಳೆ ನಷ್ಟದ ವಿವರ ನೀಡುವುದು; ಬೆಳೆ ನಷ್ಟಕ್ಕೆ ಪರಿಹಾರ ಕೈಗೊಳ್ಳಲಾಗಿದೆಯೇ?(ಈ ಬಗ್ಗೆ ಸಂಪೂರ್ಣ ಮಾಹಿತಿ ನೀಡುವುದು)</td>
<td>ವಿಷಾನಿಲ ಸೇರ್ಪಡೆಯಾಗಿ ಹಾನಿಯಾಗಿರುವ ಕೃಷಿ ಬೆಳೆಗಳ ವಿವರಗಳನ್ನು ಈ ಕೆಳಗೆ ನೀಡಲಾಗಿದೆ.
<table>
<tr><th>ಕ್ರ.ಸಂ.</th><th>ಬೆಳೆ</th><th>ಹಾನಿಯಾದ ವಿಸ್ತೀರ್ಣ (ಎಕರೆ)</th></tr>
<tr><td>1</td><td>ಭತ್ತ</td><td>19.12</td></tr>
<tr><td>2</td><td>ರಾಗಿ</td><td>2.03</td></tr>
<tr><td>3</td><td>ಕಬ್ಬು</td><td>12.11</td></tr>
<tr><td>4</td><td>ಮೇವಿನ ಜೋಳ</td><td>1.22</td></tr>
<tr><td colspan="2">ಒಟ್ಟು</td><td>34.48</td></tr>
</table>
ಹಾನಿಯಾದ ಬೆಳೆಗಳಿಗೆ ಪರಿಹಾರವನ್ನು ನಿಗದಿಪಡಿಸಲು ಕೃಷಿ ಇಲಾಖೆಯಿಂದ ಕ್ರಮ ಕೈಗೊಳ್ಳಲಾಗುತ್ತದೆ.</td>
</tr>
</table>

**ಸಂಖ್ಯೆ: ಅಪಜೀ 233 ಇಪಿಸಿ 2018**

(ಆರ್. ಶಂಕರ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು.